# *ಶ್ರೀ ರಾಘವೇಂದ್ರ ಕರಾವಲಂಬನ-ಸ್ತೋತ್ರಮ್*

**ಶ್ರೀಮತ್ಸುಧೀಂದ್ರ-ಮುನಿ-ದುಗ್ಧ-ಪಯೋಧಿ-ಚಂದ್ರ**
**ಕರ್ಮಂದಿ-ಯೋಗಿ-ಸುರ-ವೃಂದ-ನಿಷೇವಿತೇಂದ್ರ॥**
**ವೃಂದಾರಕಾಗ್ರ್ಯ, ಗುಣ-ಸಾಂದ್ರ, ನಿರಸ್ತ-ತಂದ್ರ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧॥**

ಸುಧೀಂದ್ರ ತೀರ್ಥರೆಂಬ ಮಹಾಮುನಿಗಳು ಒಂದು ಕ್ಷೀರ ಸಮುದ್ರವಿದ್ದಂತೆ. ಅದರಲ್ಲಿ ಉದಿಸಿದ ಚಂದ್ರರೇ ಶ್ರೀ ರಾಘವೇಂದ್ರರು. ಸನ್ಯಾಸಿಗಳು, ಯೋಗಿಗಳು ಎಂಬ ದೇವತಾ ವೃಂದವು ಪರಿಪರಿಯಿಂದ ಸೇವಿಸುವ ಇಂದ್ರರೇ ಶ್ರೀ ರಾಘವೇಂದ್ರರು. ಇವರು ಶ್ರೇಷ್ಠರಲ್ಲಿ ಅತಿ ಶ್ರೇಷ್ಠರು ಗುಣಪೂರ್ಣರು. ಆಲಸ್ಯಾದಿ ದೋಷಗಳನ್ನು ದೂರ ಮಾಡುವವರು. ಏವಂ ಗುಣ ವಿಶೇಷಣ ವಿಶಿಷ್ಟರಾದ ಶ್ರೀ ರಾಘವೇಂದ್ರ ಸ್ವಾಮಿಗಳೇ, ನನಗೆ ನಿಮ್ಮ ಹಸ್ತಾವಲಂಬನವನ್ನು ನೀಡಿರಿ, ಕರುಣೆಯಿಂದ ಕೈ ಹಿಡಿದು ಕಾಪಾಡಿರಿ.

**ವಂದಾರು-ಭಕ್ತ-ಪರಿಷೇವ್ಯ-ಪದಾರವಿಂದಂ**
**ವೃಂದಾರಕಾರಿ-ಜನುಷಾಽರ್ಚಿತ-ಪನ್ಮುಕುಂದಂ॥**
**ವಂದೇ ಭವಂತಮಸಹಾಯ ಗತಿಂ ನ ವಿಂದೇ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨॥**

ಗುರುಗಳೇ, ನಿಮ್ಮ ಪಾದಾರವಿಂದವನ್ನು ಭಕ್ತ ಜನರು ಪರಿಪರಿಯಿಂದ ಸೇವಿಸಿ ನಮಸ್ಕರಿಸುತ್ತಾರೆ. ನೀವು ಜನ್ಮಾಂತರದಲ್ಲಿ ದೈತ್ಯ ರಾಜನಾದ ಹಿರಣ್ಯಕಶಿಪುವಿನ ಹೊಟ್ಟೆಯಿಂದ ಹುಟ್ಟಿ ಮುಕುಂದನಾದ ನರಸಿಂಹ ದೇವರ ಪಾದಾರವಿಂದಗಳನ್ನು ಅರ್ಚಿಸಿದಿರಿ. ನಿಮ್ಮನ್ನು ಬಿಟ್ಟರೆ ನನಗೆ ಬೇರೆ ಗತಿಯಿಲ್ಲ, ಆದುದರಿಂದ ನಾನು ನಿಮ್ಮನ್ನೇ ನಂಬಿ ನಿಮಗೇ ನಮಸ್ಕರಿಸುತ್ತೇನೆ. ಗುರುರಾಘವೇಂದ್ರರೇ, ನನಗೆ ಕರಾವಲಂಬನವನ್ನು ನೀಡಿರಿ.

**ದಾತುಂ ಮಮೇಚ್ಛತಿ ನ ಕೋಽಪಿ ಕರಾವಲಂಬಂ**
**ನಾಹಂ ತ್ವದನ್ಯಮವಲಂಬಿತುಮುತ್ಸುಕೋಽಸ್ಮಿ**
**ತ್ವತ್ಕಾರ್ಯಮೇತದಿಹ ಕಿಂ ಕುರುಷೇ ವಿಲಂಬಂ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೩॥**

ಬೇರೆ ಯಾರೂ ನನಗೆ ಕರಾವಲಂಬನವನ್ನು ಕೊಟ್ಟು ಕೈ ಹಿಡಿದು ಕಾಪಾಡುವವರು ಇಲ್ಲ, ನಿಮ್ಮನ್ನು ಬಿಟ್ಟು ಬೇರೆಯವರನ್ನು ಅವಲಂಬಿಸಲು ನನಗೂ ಇಚ್ಛೆಯಾಗಲೀ ಉತ್ಸಾಹವಾಗಲೀ ಇರುವದಿಲ್ಲ, ಗುರುಗಳೇ ಇದು ನಿಮ್ಮ ಕಾರ್ಯ, ಏಕೆ ತಡ ಮಾಡುವಿರಿ? ಶ್ರೀ ರಾಘವೇಂದ್ರ ಸ್ವಾಮಿಗಳೇ, ನನಗೆ ಬೇಗನೆ ಕರಾವಲಂಬನವನ್ನು ನೀಡಿರಿ.

**ಶ್ರೀಮನ್ನಿಧೇಹಿ ಚರಣಂ ಮಮ ನಮ್ರಶೀರ್ಷ್ಣಿ**
**ಸ್ವಾಮಿನ್ ವಿಧೇಹಿ ಕರುಣಾಂ ಶರಣಾಗತೇಽಸ್ಮಿನ್॥**
**ಭೋ ಮಾಮವೇಹಿ ತವ ಕಿಂಕರತಾಮುಪೇತಂ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೪॥**

ಶ್ರೀ ದೇವಿಯ ಪರಮಾನುಗ್ರಹಕ್ಕೆ ಪಾತ್ರರಾದ ಗುರುಗಳೇ ನಿಮ್ಮ ಚರಣವನ್ನು ನಂರನಾದ ನನ್ನ ತಲೆಯ ಮೇಲೆ ಇರಿಸಿರಿ. ಸ್ವಾಮಿಗಳೇ ನಾನು ನಿಮಗೆ ಶರಣಾಗತನಾಗಿದ್ದೇನೆ. ಶರಣು ಬಂದ ನನ್ನ ಮೇಲೆ ನಿಮ್ಮ ಕರುಣೆಯನ್ನು ತೋರಿಸಿರಿ. ಪೂಜ್ಯರೇ ನನ್ನನ್ನು, ನಿಮ್ಮಕೈಂಕರ್ಯವನ್ನು ಹೊಂದಿದ ಸೇವಕ ಎಂದು ತಿಳಿಯಿರಿ. ಶ್ರೀ ರಾಘವೇಂದ್ರರೇ ನನಗೆ ನಿಮ್ಮ ಹಸ್ತದ ಆಲಂಬನವನ್ನು ನೀಡಿರಿ.

**ನಾರಾಯಣಾಂಘ್ರಿ-ಶರಣಾಽಶಮ-ಮಾಧ್ವ-ಶಾಸ್ತ್ರ-**
**ಪಾರಾಯಣ-ಪ್ರವಚನಾದಿ-ಪರಾಯಣ ತ್ವಮ್॥**
**ಘೋರಾಪದಾಲಿ-ಪರಿಹಾರ-ಪಟೋ ಮುನೀಂದ್ರ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೫॥**

ನಾರಾಯಣನ ಪಾದಗಳಿಗೆ ಶರಣು ಹೋದ ನೀವು ಜಗತ್ತಿನಲ್ಲಿ ಅಸಾಧಾರಣವಾದ ಮಧ್ವ ಶಾಸ್ತ್ರದ ಪಾರಾಯಣ ಪ್ರವಚನಾದಿಗಳಲ್ಲಿ ಸರ್ವದಾ ಆಸಕ್ತರಾಗಿರುತ್ತೀರಿ. ಮುನಿಶ್ರೇಷ್ಠರೇ ಮಾನವರ ಘೋರತರವಾದ ಕುತ್ತು ಆಪತ್ತುಗಳನ್ನು ಪರಿಹರಿಸಲು ನೀವೇ ಸಮರ್ಥರು ಆದುದರಿಂದ ಗುರು ರಾಘವೇಂದ್ರರೇ ನನ್ನ ಕೈಯನ್ನು ಪಿಡಿಯಿರಿ ನನಗೆ ನಿಮ್ಮ ಕರಾವಲಂಬನವನ್ನು ನೀಡಿರಿ.

**ವೈರಾಗ್ಯ-ಭಾಗ್ಯ, ಕರುಣಾ-ವರುಣಾಲಯಾಽಸಿ**
**ಶ್ರೀ-ರಾಮ-ಪಾದ-ಸರಸೀರುಹ-ಚಂಚರೀಕ॥**
**ಆರಾತ್ತ್ರವೈತ್ಯ ಚರಣಂ ಶರಣಂ ಗತಸ್ಯ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೬॥**

ಗುರುಗಳೇ ವೈರಾಗ್ಯವೇ ನಿಮ್ಮ ಭಾಗ್ಯ. ನೀವು ಕರುಣೆಯ ಸಮುದ್ರರು. ಶ್ರೀ ರಾಮಚಂದ್ರನ ಪಾದ ಕಮಲದಲ್ಲಿ ನೀವು ದುಂಬಿಯಂತೆ ಆಸಕ್ತರಾಗಿದ್ದೀರಿ. ನಿಮ್ಮ ಚರಣದ ಸಮೀಪದಲ್ಲಿ ಬಂದು ಶರಣಾಗತನಾದ ನನಗೆ ನೀವು ಹಸ್ತಾವಲಂಬನವನ್ನು ನೀಡಿರಿ.

**ಆರಾಧಕೋಽಪಿ ಕಮಲಾ-ರಮಣಸ್ಯ ಸ ತ್ವಂ**
**ಶ್ರೀ-ರಾಜ್ಯ-ಹೇಮ-ಮಣಿ-ಮೌಕ್ತಿಕ-ಮೋಹ-ದೂರಃ॥**
**ರೈ-ರಾಶಿ-ದಾರ-ಗೃಹ-ಮೋಹ-ಖಿಲೀಕೃತಸ್ಯ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೭॥**

ನೀವು ಲಕ್ಷ್ಮೀ ಪತಿಯಾದ ಶ್ರೀ ಹರಿಯ ಆರಾಧಕರಾದರೂ ಕೂಡ ಲಕ್ಷ್ಮಿಯ ಅರ್ಥಾತ್ ಸಂಪತ್ತಿನ ಮೋಹ ನಿಮಗಿಲ್ಲ ರಾಜ್ಯದ ಆಸೆ ನಿಮಗೆ ಇಲ್ಲ, ನಿಮಗೆ ಚಿನ್ನದ ಆಸೆ ರನ್ನದ ಅಪೇಕ್ಷೆ ಮುತ್ತಿನ ಬಯಕೆ ಎಂದಿಗೂ ಇಲ್ಲ ಇವೆಲ್ಲವುಗಳ ಮೋಹದಿಂದ ನೀವು

ದೂರ ಇರುವ್ರಿ. ಆದರೆ ನಾನು ಮಾತ್ರ ಸಂಪತ್ತಿನ ರಾಶಿಯ ಮೋಹ ಮಡದಿಯ ಮೋಹ ಮನೆಯ ಮೋಹಗಳು ಕೂಡಿ ನನ್ನನ್ನು ದುಷ್ಟನನ್ನಾಗಿ ಮಾಡಿವೆ. ಆದುದರಿಂದ ಗುರುರಾಘವೇಂದ್ರರೇ ನನ್ನನ್ನು ಕೈ ಹಿಡಿದು ಕಾಪಾಡಿರಿ.

**ವಾರಾಶಿಜಾ-ನಯನ-ನಿಶ್ಚಲ-ದೀಪಮಾಲಾ-**

**ನೀರಾಜಿತಾಂಘ್ರಿ-ಯುಗಲಸ್ಯ ಪರಾತ್ಪರಸ್ಯ।**

**ಶ್ರೀರಾಮ-ನಾಮಕ-ವಿಭೋಶ್ಚರಣಾರ್ಚಕ ತ್ವಂ**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೮॥**

ಕ್ಷೀರ ಸಮುದ್ರದಿಂದ ಹುಟ್ಟಿದ ಲಕ್ಷ್ಮೀ ದೇವಿಯ ನೇತ್ರದ ಕಾಂತಿಯು ಒಂದು ದೀಪ ಮಾಲೆಯಿದ್ದಂತೆ. ಆ ಜ್ಯೋತಿರ್ಮಾಲೆಯಿಂದ ಲಕ್ಷ್ಮೀ ದೇವಿಯು ಪರಮಾತ್ಮನ ಪಾದ ಕಮಲಗಳಿಗೆ ತನ್ನ ನಯನ ನೀಲಾಂಜನದಿಂದ ಆರತಿ ಮಾಡುತ್ತಾಳೆ. ಅಂಥ ಪರಾತ್ಪರನಾದ ಶ್ರೀ ರಾಮ ಎಂಬ ಹೆಸರಿನ ಮಹಾ ಪ್ರಭುವಿನ ಚರಣ ಕಮಲಗಳ ಅರ್ಚಕರಾದ ನೀವು ನನಗೆ ಹಸ್ತಾವಲಂಬನವನ್ನು ನೀಡಿರಿ.

**ಕಾರಾ-ಗೃಹಾಯಿತ-ಭವೋದ್ಭವ-ದುಃಖ-ತಪ್ತಂ**

**ನೈರಾಶ್ಯ-ಭಾವ-ನಿಹತಂ ತವ ಶಿಷ್ಯಮೇನಮ್।**

**ಕೋ ರಾಗಿಣಂ ಸಮವಿತುಂ ಕ್ಷಮತೇ ವಿನಾತ್ವಾಂ**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೯॥**

ಈ ಸಂಸಾರವು ಒಂದು ಕಾರಾಗೃಹವಿದ್ದಂತೆ. ನಿಮ್ಮ ಶಿಷ್ಯನಾದ ನಾನು ಸಾಂಸಾರಿಕ ದುಃಖದಿಂದ ತಪ್ತನಾಗಿದ್ದೇನೆ. ನಿರಾಶಾ ಭಾವವು ನನ್ನನ್ನು ಮುಸುಕಿದೆ. ನಿಮ್ಮ ಹೊರತು ಸಂಸಾರದಲ್ಲಿ ಅನುರಕ್ತನಾದ ನನ್ನನ್ನು ರಕ್ಷಣೆ ಮಾಡಲುಯಾರು ಸಮರ್ಥರಿರುತ್ತಾರೆ? ಆದುದರಿಂದ ಶ್ರೀ ರಾಘವೇಂದ್ರ ಸ್ವಾಮಿಗಳೇ ನೀವೇ ನನಗೆ ಹಸ್ತಾವಲಂಬನವನ್ನು ಕೊಟ್ಟು ಉದ್ಧಾರ ಮಾಡಿರಿ.

**ದಾರಾ ಮನೋ-ಮೃಗ-ನಿಬಂಧನ-ವಾಗುರಾಃಕೇ-**

**ದಾರಾಲಯಾತ್ಮಜ-ಮುಖಾ ಭವತೋ ನಿವೃತ್ತೇಃ।**

**ವೈರಾಯಿತಾ ಮಮ ಕಥಂ ನು ಸಮೃದ್ಧೃತಿಃಸ್ಯಾತ್**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೦॥**

ಹೆಂಡತಿ, ಹೊಲ ಮನೆ ಮಕ್ಕಳು ಮೊದಲಾದವರು ನನ್ನ ಮನಸ್ಸೆಂಬ ಚಿಗರೆಯನ್ನು ಬಂಧಿಸುವ ಜಾಲದಂತೆ ಇರುತ್ತಾರೆ. ಸಂಸಾರದಿಂದ ನಿವೃತ್ತನಾಗುವದಕ್ಕೆ ಅವರು ವೈರಿಗಳಂತೆ ವಿರೋಧಿಗಳಾಗಿದ್ದಾರೆ. ನನ್ನ ಉದ್ಧಾರವು ಆಗುವದೆಂತು. ಆದುದರಿಂದ ರಾಘವೇಂದ್ರ ಸ್ವಾಮಿಗಳೇ ನೀವು ನನಗೆ ಹಸ್ತಾವಲಂಬನವನ್ನು ಕೊಟ್ಟು ಕರುಣೆಸಿರಿ.

**ಕ್ಷೀರಾಬ್ಧಿಶಾಯಿ-ಪದ-ಪೂಜಕ ಭೋ ಭವಾಖ್ಯ-**

**ಕ್ಷಾರಾಬ್ಧಿ-ಮಗ್ನ-ಪರಿಭುಗ್ನ-ಜಡಾತ್ಮನೋ ಮೇ।**

**ನಾರಾದುಪೈತಿ ಮುನಿ-ದೇವ-ಗಣೇಷು ಕೋಽಪಿ**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೧॥**

ಕ್ಷೀರ ಸಮುದ್ರದಲ್ಲಿ ಶಯನ ಮಾಡಿದ ಶ್ರೀ ಹರಿಯ ಸೇವನೆ ಮಾಡಿದ ಶ್ರೀ ರಾಘವೇಂದ್ರರೇ ನಾನು ಸಂಸಾರವೆಂಬ ಉಪ್ಪಿನ ಸಮುದ್ರದಲ್ಲಿ ಮುಳುಗಿದ್ದೇನೆ. ಜಡಾತ್ಮನಾದ ನಾನು ಭಗ್ನ-ಭುಗ್ನನಾಗಿ ಕುಗ್ಗಿ ಹೋಗಿದ್ದೇನೆ. ದೇವತಾ ಗಣದಲ್ಲಿ ಯಾರೊಬ್ಬರೂ ನನ್ನ ಸಮೀಪದಲ್ಲಿಯೂ ಸುಳಿಯುವದಿಲ್ಲ. ಆದುದರಿಂದ ರಾಘವೇಂದ್ರ ಸ್ವಾಮಿಗಳೇ ನೀವು ನನ್ನ ಕೈ ಹಿಡಿದು ಉದ್ಧಾರ ಮಾಡಿರಿ.

**ಶ್ರೀರಾಡ್ ಹರೇರ್ಗುಣ ಕಥಾಪರ ವೇದಶಾಸ್ತ್ರೀ**

**ಪಾರಾಯಣ-ಪ್ರವಣ-ಸಂಸೃತಿಘೋರವಾರ್ಧೇಃ।**

**ಪಾರಾಯಣಾಯ ವದ ಕಸ್ತ್ವದೃತೇ ಕ್ಷಮೇತ**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೨॥**

ಲಕ್ಷ್ಮೀ ಪತಿಯಾದ ನಾರಾಯಣನ ಗುಣಗಳ ಕಥನ ಪರವಾದ ವೇದ ಶಾಸ್ತ್ರಗಳ ಪಾರಾಯಣದಲ್ಲಿ ಗುರು ರಾಘವೇಂದ್ರರೇ ನೀವು ಯಾವಾಗಲೂ ಆಸಕ್ತರಾಗಿದ್ದೀರಿ. ಸಂಸಾರವೆಂಬ ಈ ಘೋರ ಸಮುದ್ರದಿಂದ ನನ್ನನ್ನು ಪಾರು ಮಾಡಲು ನಿಮ್ಮ ಹೊರತು ಯಾರು ಮಾಡುತ್ತಾರೆ. ಆದುದರಿಂದ ಗುರುಗಳೇ ನೀವೇ ನನಗೆ ಕೈ ಹಿಡಿದು ಉದ್ಧಾರ ಮಾಡಿರಿ.

**ಕೀರಾರ್ಭ-ತುಲ್ಯಮಪಠಂ ನಿಗಮಾಗಮಾನ್ಯೋ**

**ಸಾರಾರ್ಥಮಾಕಲಯಮಾಚರಮೇತದಾಜ್ಞಾಮ್।**

***ತಾರಾದಿ-ಮಂತ್ರ-ಜಪ-ಪೂಜನಮಪ್ಯತೋಽಸ್ಯ**

**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೩॥**

ವೇದ ಶಾಸ್ತ್ರಗಳನ್ನು ನಾನು ಗಿಳಿಯ ಮರಿಯಂತೆ ಕೇವಲ ಪಠನೆ ಮಾಡಿದೆ. ಅವುಗಳ ಸಾರಭೂತವಾದ ಅರ್ಥವನ್ನು ತಿಳಿಯಲಿಲ್ಲ.ಆ ವೇದ ಶಾಸ್ತ್ರಗಳ ಆಜ್ಞೆಯನ್ನು ನಾನು ಪಾಲನೆ ಮಾಡಲಿಲ್ಲ. ಓಂ ಕಾರವೇ ಮೊದಲಾಗಿಉಳ್ಳ ಮಂತ್ರಗಳ ಜಪವನ್ನು ಹಾಗೂ ಪೂಜೆಯನ್ನು ನಾನು ಮಾಡಲಿಲ್ಲ. ಆದುದರಿಂದ ಇಂಥ ನನಗೆ ಗುರು ರಾಘವೇಂದ್ರರೇ ನಿಮ್ಮ ಹಸ್ತಾವಲಂಬನವನ್ನು ಕೊಡಿರಿ.

**ದೂರಾವಣಾದ್ಯಸುರವನ್ನನು ದುಸ್ಸಹೋದ್ಯನ್**

**ಮಾರಾಮಯ-ಸ್ಮಯ-ರುಷಾದಿ-ರುಜಾತುರಸ್ಯ।**

**ಭೋ ರಾಮಪೂಜಕ ಗುರೋ ತ್ವದೃತೇ ಶರಣ್ಯಃ**

**ಕೋ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೪॥**

ದುಷ್ಟನಾದ ರಾವಣಾದಿ ದೈತ್ಯನಂತೆ ನಾನು ಸಹಿಸಲು ಅಶಕ್ಯವಾದ ಕಾಮ ರೋಗ, ಗರ್ವ, ಕ್ರೋಧ ಮೊದಲಾದ ರೋಗಗಳಿಂದ ಆತುರನಾಗಿದ್ದೇನೆ. ರಾಮನನ್ನು ಪೂಜೆ ಮಾಡುವ ಗುರುಗಳೇ ನಿಮ್ಮ ಹೊರತು ಶರಣು ಬಂದ ನನ್ನನ್ನು ಕರುಣೆಯಿಂದ ರಕ್ಷಿಸುವವರು ಯಾರು ಇದ್ದಾರೆ. ಗುರುಗಳೇ ನೀವೇ ನನ್ನನ್ನು ಹಸ್ತಾವಲಂಬನವನ್ನು ಇತ್ತು ರಕ್ಷಿಸಿರಿ.

**ಸ್ವಾರಾಜ್ಯ-ಸೌಖ್ಯ-ಮಧಿಕಾರಮಿಹೈವ ಕೇಚಿತ್**
**ಸ್ವಾರಾಜ್ಯ ಭಾಗ್ಯ ಮಪರತ್ರ ಲಭಂತಿ ಚಾನ್ಯೇ॥**
**ಶ್ರೀರಾಘವಾಂಘ್ರಿ-ರತಿರಿಷ್ಟ ತಮಾ ನ ಚಾನ್ಯತ್**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೫॥**

ಕೆಲವು ಜನರು ಇದೇ ಲೋಕದಲ್ಲಿ ಸ್ವರಾಜ್ಯದ ಸ್ವಾತಂತ್ರ ಸೌಖ್ಯವನ್ನೂ, ಅಧಿಕಾರವನ್ನೂ, ಇಲ್ಲಿಯೇ ಅನುಭವಿಸಬೇಕೆಂದು ಅಪೇಕ್ಷಿಸುತ್ತಾರೆ. ಇನ್ನು ಬೇರೆ ಅನೇಕ ಜನರು ಮರಣಾನಂತರ ಸ್ವರ್ಗ ಲೋಕದ ಭಾಗ್ಯವನ್ನು ಅಪೇಕ್ಷಿಸುತ್ತಾರೆ. ಆದರೆ ಶ್ರೀ ರಾಘವೇಂದ್ರ ಸ್ವಾಮಿಗಳ ಪಾದದಲ್ಲಿ ಭಕ್ತಿಯು ಮಾತ್ರ ನನಗೆ ಅತ್ಯಂತ ಇಷ್ಟವಾಗಿರುತ್ತದೆ. ನನಗೆ ಬೇರೆ ಯಾವುದೂ ಇಷ್ಟವಾಗಿಲ್ಲ, ಗುರುಗಳೇ ನನಗೆ ಕರಾವಲಂಬನವನ್ನು ನೀಡಿರಿ.

**ನಾರಾಯಣೋ ನ ಹಿ ಮಯಾರ್ಚಿತ ಏವ ಮೌಢ್ಯಾತ್**
**ಪಾರಾಯಣಂ ನ ವಿಹಿತಂ ನಿಗಮಾಗಮಾನಾಮ್॥**
**ನೀರಾಜಿತೋ ಹರಿರತಃ ಕಥಮುದ್ಧೃತಿಸ್ಸ್ಯಾತ್**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೬॥**

ಮೂರ್ಖತನದಿಂದ ನಾನು ಸರಿಯಾಗಿ ನಾರಾಯಣನ ಪೂಜೆಯನ್ನು ಮಾಡಲೇ ಇಲ್ಲ, ವೇದ ಶಾಸ್ತ್ರಗಳ ಪಾರಾಯಣೆಯನ್ನು ಕೂಡ ನಾನು ಮಾಡಲಿಲ್ಲ ಮತ್ತು ನಾನು ಎಂದೂ ಶ್ರೀ ಹರಿಯ ನೀರಾಜನ ಮಂಗಳಾರತಿ ಮೊದಲಾದ ವಿಧಿಪೂರ್ವಕವಾಗಿ ಶ್ರೀ ಹರಿಯ ಅರ್ಚನೆಯನ್ನು ಮಾಡಲಿಲ್ಲ, ಅಂದ ಬಳಿಕ ನನ್ನ ಉದ್ಧಾರವು ಹೇಗೆ ಆಗಬೇಕು. ಆದ್ದರಿಂದ ರಾಘವೇಂದ್ರ ಗುರುಗಳೇ ನೀವೇ ನನಗೆ ಹಸ್ತಾವಲಂಬನವನ್ನು ನೀಡಿರಿ.

**ಹಾರಾ ನ ಹಾರಿ ಹರಿ-ನಾಮ-ಧೃತಂ ಹಿ ಕಂಠೇ**
**ಶೂರಾಃ ಸ್ತುತಾ ಧನಿ-ಗಣಾ ನ ತು ಶೂರ-ಪೌತ್ರ॥**
**ತಾರಾರ್ಥ ಉಜ್ಝಿತ ಉತಾತ್ರ ನ ಚಿತ್ರತಾರಾಃ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೭॥**

ನಾನು ನನ್ನ ಕಂಠದಲ್ಲಿ ಹರಿಯ ನಾಮಗಳನ್ನು ಧರಿಸಿಲಿಲ್ಲ ಹಾರಗಳನ್ನು ಮಾತ್ರ ಧರಿಸಿದೆ. ಶೂರರನ್ನು ಸ್ತೋತ್ರ ಮಾಡಿದೆ ಆದರೆ ಶೂರನ ಮೊಮ್ಮಗನಾದ ಶೌರಿ ಎಂದರೆ ಕೃಷ್ಣನನ್ನು ಸ್ತೋತ್ರ ಮಾಡಲಿಲ್ಲ, ತಾರಾರ್ಥ ಎಂದರೆ ಓಕಾರದ
ಅರ್ಥಭೂತನಾದ ಹರಿಯನ್ನು ಬಿಟ್ಟು ಬಿಟ್ಟೆನು ಆದರೆ ಚಿತ್ರ ತಾರೆಯರನ್ನು ಮಾತ್ರ ಬಿಡಲಿಲ್ಲ, ಅದುದರಿಂದ ಗುರುಗಳೇ ನೀವು ನನ್ನ ಕೈ ಹಿಡಿದು ಕರುಣಿಸಿರಿ.

**ವಾರಾಹ-ಪಾವನ-ಕಲೇವರ-ಭೂ-ತಟಿನ್ಯಾಃ**
**ತೀರಾಲಯೇ ನಿಪತಿತೋದ್ಧರಣಾಯ ಸಿದ್ಧಃ॥**
**ರಾರಾಜಸೇ ನು ಮಣಿ-ಭೇಷಜ-ಮಂತ್ರ-ತಂತ್ರೈಃ**
**ಕಿಂ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೮॥**

ವರಾಹ ದೇವರ ಪವಿತ್ರವಾದ ಶರೀರದಿಂದ ಹುಟ್ಟಿದ ತುಂಗಾನದಿಯ ತೀರದಲ್ಲಿ ಇರುವ ಮಂದಿರದಲ್ಲಿ ಪತಿತೋದ್ಧಾರಕ್ಕಾಗಿ ಶುದ್ಧರಾಗಿ ನೀವು ರಾರಾಜಿಸುತ್ತಲಿದ್ದೀರಿ. ಮಣಿ, ಔಷಧ, ಮಂತ್ರ, ತಂತ್ರಗಳಿಂದ ಏನು ಮಾಡುವದು? ರಾಘವೇಂದ್ರ ಗುರುಗಳೇ ನನಗೆ ಕರಾವಲಂಬನವನ್ನು ನೀಡಿರಿ.

**ಜಾರಾಯ ಗೋಪ-ಸುದೃಶಾಂ ಗೃಹ-ದುಗ್ಧ-ಮಂಡ-**
**ಚೋರಾಯ ಚ ಸ್ಪೃಹಯತೆ ಸತತಂ ಮನೋ ಮೇ॥**
**ದೂರಾತ್ತಮಾ ಪಯತಿ ಕೋ ನನು ಮಾಂ ತ್ವದನ್ಯಃ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೧೯॥**

ಗೋಪ ಸ್ತ್ರೀಯರ ಜೊತೆಗೆ ವಿಹರಿಸಿ ಜಾರ ಎನಿಸಿಕೊಂಡ ಮತ್ತು ಮನೆಗಳಲ್ಲಿ ಇರುವ ಹಾಲು ಬೆಣ್ಣೆ ಕೆನೆ ಮುಂತಾದವುಗಳನ್ನು ಕದ್ದು ಚೋರ ಎಂದೂ ಕರೆಯಲ್ಪಡುವ ಕೃಷ್ಣನಿಗಾಗಿ ನನ್ನ ಮನಸ್ಸು ಯಾವಾಗಲೂ ತವಕಿಸುತ್ತದೆ. ಅಥವಾ ಆಶೆ ಪಡುತ್ತದೆ. ಆದರೆ ನಮ್ಮ ಆಶೆಯಂತೆ ನಮ್ಮನ್ನು ಆ ಕೃಷ್ಣನ ಬಳಿಗೆ ನಿಮ್ಮನ್ನು ಬಿಟ್ಟು ಬೇರೆ ಯಾರು ನಮ್ಮನ್ನು ಕ್ರೆದುಕೊಂಡು ಹೋದಾರು. ಆದ್ದರಿಂದ ಶ್ರೀ ರಾಘವೇಂದ್ರ ಸ್ವಾಮಿಗಳೇ ನನಗೆ ಹಸ್ತಾವಲಂಬನವನ್ನು ನೀಡಿರಿ.

**ಚೀರಾಣಿ ನೈವ ವಿಧೃತಾನಿ ಗುಹೋಪಯಾತಾ**
**ದಾರಾಧಿಕಾರ-ಗೃಹ-ಪುತ್ರ-ಮುಖಾ ವಿಸೃಷ್ಟಾಃ॥**
**ಸ್ವೈರಾಪಚಾರ-ನಿರತಸ್ಯ ಗತಿ ರ್ನ ಕಾ ಮೇ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೦॥**

ಗುರುಗಳೇ ನಾನು ಎಂದೂ ನಾರ ಬಟ್ಟೆಯನ್ನು ಉಡಲಿಲ್ಲ, ಅರಣ್ಯದಲ್ಲಿರುವ ಗುಹೆಗಳಲ್ಲಿ ಹೋಗಿ ತಪಸ್ಸೂ ಮಾಡಲಿಲ್ಲ, ಗಿಡದ ತೊಗಟೆಯಿಂದ ಮಾಡಿದ ಬಟ್ಟೆಯನ್ನೂ ಧರಿಸಲಿಲ್ಲ, ಕಾಡಿನಲ್ಲಿರುವ ಗುಹೆಗಳಲ್ಲಿ ತಪಸ್ಸು ಮಾಡಲು ಹೋಗಲಿಲ್ಲ, ಮಡದಿ ಅಧಿಕಾರ ಮನೆ ಮತ್ತು ಪುತ್ರ ಮೊದಲಾದವರನ್ನು ನಾನು ತ್ಯಾಗ ಮಾಡಲಿಲ್ಲ, ಸ್ವಚ್ಛಂದವಾಗಿ ಅಪರಾಧ ಮಾಡುವಲ್ಲಿ ಆಸಕ್ತನಾದ ನನಗೆ ಏನುಗತಿಯಾದೀತು? ಆದುದರಿಂದ ಶ್ರೀ ರಾಘವೇಂದ್ರ ಸ್ವಾಮಿಗಳೇ ನನಗೆ ಹಸ್ತಂದೋಲನವನ್ನು ಕೊಟ್ಟು ಕೈ ಹಿಡಿದು ಕಾಪಾಡಿರಿ.

---

*ಓಂಕಾರಪೂರ್ವಕಾಮಂತ್ರಾಃ #ದುಷ್ಟರಾವಣಾದಿವತ್

@ಸ್ವಃ=ಸ್ವರ್ಗಃ ತದ್ರಾಜ್ಯಸುಖಭಾಗ್ಯಂ

**ಆರಾಧಿತಾ ನ ಗುರವಃ ಪವಮಾನ-ಮುಖ್ಯಾಃ**
**ಶ್ರೀರಾಧಿಕಾ-ರಮಣ-ನಾಮ ನ ಕೀರ್ತಿತಂ ಚ॥**
**ವಿಪ್ರೋ ಹಿ ಪಶ್ಚಿಮ-ಮತಿಃ ಕಿಮಹಂ ಕರೋಮಿ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೧॥**

ಗುರುವರ್ಯರೇ ನಾನು ಪ್ರಾಣದೇವರೇ ಮುಖ್ಯರಾದ ಗುರುಗಳ ಆರಾಧನೆಯನ್ನು ಮಾಡಲಿಲ್ಲ, ರಾಧಾಕೃಷ್ಣನ ನಾಮವನ್ನು ಹಾಡಿ ಪಾಡಲಿಲ್ಲ, ಬ್ರಾಹ್ಮಣರಿಗೆ ಅನಂತರ ಬುದ್ಧಿ ಬರುತ್ತದೆ ನಾನಾದರೂ ಏನು ಮಾಡಲಿ. ಆದುದರಿಂದ ರಾಘವೇಂದ್ರ ಗುರುಗಳೇ ನನಗೆ ಹಸ್ತಾಂದೋಲನವನ್ನು ಮಾಡಿರಿ.

**ಘೋರಾಪರಾಧ-ಶತಕಾನಿ ರಹಃ-ಕೃತಾನಿ**
**ಚಾರಾ ಯಮಸ್ಯ ಬಹು ಸೂಕ್ಷ್ಮದೃಶೋ ವಿದಂತಿ॥**
**ಕ್ರೂರಾಶ್ಚ ತೇ ನ ಕೃಪಿಣೋ ನ ಹಿ ಕೋಽಪ್ಯುಪಾಯಃ**
**ಶ್ರೀ ರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೨॥**

ನಾನು ರಹಸ್ಯವಾಗಿ ಮಾಡಿದ ನೂರಾರು ಘೋರವಾದ ಅಪರಾಧಗಳನ್ನು ಯಮದೇವರ ಅತ್ಯಂತ ಸೂಕ್ಷ್ಮವಾದ ದೃಷ್ಟಿಯುಳ್ಳ ಯಮದೂತರು ತಿಳಿದುಕೊಳ್ಳುತ್ತಾರೆ. ಮೇಲಾಗಿ ಅವರು ಮಹಾ ಕ್ರೂರರು ಅವರು ಎಂದೂ ಕರುಣಾಳುಗಳಲ್ಲ, ಆದುದರಿಂದ ನಮಗೆ ಬೇರೆ ಉಪಾಯವೇ ಇಲ್ಲ, ಶ್ರೀ ರಾಘವೇಂದ್ರರೇ ನನಗೆ ಕರಾವಲಂಬನವನ್ನು ನೀಡಿರಿ.

***ನಾರಾಶ್ಚ ಸಂತಿ ಮಯಿ ಸರ್ವವಿಧಾ ಹಿ ದೋಷಾಃ**
**ಸಾರಾ ಲಸಂತಿ ಸುಗುಣಾ ಸ್ತ್ವಯಿ ಸರ್ವ ಏವ॥**
**ಸ್ವೈರಾಪರಾಧ ಉಚಿತಾ ಮಯಿ ತೇ ಕ್ಷಮಾ ಚ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೩॥**

ಮನುಷ್ಯ ಸಂಬಂಧಿಯಾದ ದೋಷಗಳು ಎಷ್ಟು ಇರುವವೋ ಅವೆಲ್ಲವೂ ನನ್ನಲ್ಲಿ ಇರುತ್ತವೆ. ದೇವತೆಗಳಲ್ಲಿ ಇರಬೇಕಾದ ಸಕಲ ಸದ್ಗುಣಗಳು ತಮ್ಮಲ್ಲಿ ಇರುತ್ತವೆ. ಸ್ವಚ್ಛಂದವಾಗಿ ಅನೇಕ ಅಪರಾಧಗಳನ್ನು ಮಾಡಿದ ನನ್ನಲ್ಲಿ ಕ್ಷಮೆ ಮಾಡುವದು ನಿಮಗೆ ಉಚಿತವಾಗಿದೆ. ಆದುದರಿಂದ ಶ್ರೀ ರಾಘವೇಂದ್ರರೇ ನನಗೆ ನಿಮ್ಮ ಹಸ್ತಾವಲಂಬನವನ್ನು ನೀಡಿರಿ.

**ಪಾರಾವತಾರ್ಭ ಇವ ಭೀತ-ಹೃದಸ್ಮಿ ಘೋರಾ**
**ಕಾರಾಹಿ ಕಾಮ-ರುಡಹಂ ಕೃತಿ-ವೈರಿಣೋ ಮಾಮ್॥**
**ಹಾ ರಾಮ ರಾಮ ವಿತುದಂತಿ ನಿಹಂತಿ ಹಂತ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೪॥**

ಘೋರಾಕಾರರಾದ ಕಾಮ ಕ್ರೋಧ, ಅಹಂಕಾರ ಎಂಬ ವೈರಿಗಳು ನನ್ನನ್ನು "ರಾಮ ರಾಮ" ಹೊಡೆದು ಗಾಯಗೊಳಿಸಿ ಸಾಯಿಸುತ್ತವೆ. ಅಕಟಕಟ ನಾನು ಆ ವೈರಿಗಳಿಂದ ಪಾರಿವಾಳದ ಮರಿಯಂತೆ ಹೆದರಿ ಹೋಗಿದ್ದೇನೆ. ಆದುದರಿಂದ ರಾಘವೇಂದ್ರ ಗುರುಗಳೇ ನನಗೆ ದಯ ಅಭಯ ಹಸ್ತ ನೀಡಿರಿ.

**ಪಾರಾಶರಸ್ಯ ಹಿ ಗಿರಸ್ತ್ರರಣೀ ಭ ವಾಖ್ಯಾ-**
**ಪಾರಾಬ್ಧಿ-ತಾರಣ ವಿಧಾವಿತಿ ಜಾನ ಏವ॥**
**ಗೀರಾಪ್ಯುಯಾಜ್ಞನಮಿಮಂ ಕಥಮೇಷತಾಂ ವಾ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೫॥**

ಭಗವಾನ್ ವೇದವ್ಯಾಸ ದೇವರ ಮಾತುಗಳು ಸಂಸಾರಸಾಗರವನ್ನು ಪಾರುಗೊಳಿಸುವ ಕಾರ್ಯದಲ್ಲಿ ನೌಕೆಯಂತೆ ಇರುತ್ತವೆ ಎನ್ನುವದನ್ನು ನಾನೇನೋ ಬಲ್ಲೆ, ಆದರೆ ಆ ವ್ಯಾಸ ವಾಣಿಯು ನನ್ನ ತನಕ ಬರುವದು ಹೇಗೆ? ನಾನಾದರೂ ಅವರ ಬಳಿಗೆ ಹೋಗುವದು ಹೇಗೆ? ಅದಕ್ಕಾಗಿ ಶ್ರೀ ರಾಘವೇಂದ್ರರೇ ನೀವೇ ನನಗೆ ಹಸ್ತಾವಲಂಬನವನ್ನು ಕರುಣಿಸಿರಿ.

**ಧಾರಾಧರಸ್ಸಮಭಿವರ್ಷತಿ ಸರ್ವದಿಕ್ಷು**
**ಸೂರಾತಪೋ ವಿತನುತೇ ಜಗತಃ ಪ್ರಕಾಶಮ್॥**
**ಸೂರೀಶ ಸತ್ಪ್ರಕೃತಿರೇವ ಸಮೋಪಕಾರಃ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೬॥**

ಮೋಡವು ಎಲ್ಲ ದಿಕ್ಕುಗಳಲ್ಲಿಯೂ ಮಳೆಗರೆಯುತ್ತದೆ. ಸೂರ್ಯನ ಬಿಸಿಲು ಜಗತ್ತಿಗೆಲ್ಲ ಪ್ರಕಾಶವನ್ನು ಹರಡುತ್ತದೆ. ಪಂಡಿತೋತ್ತಮರಾದ ಗುರುಗಳೇ ಎಲ್ಲರಿಗೂ ಉಪಕಾರ ಮಾಡುವದು ಸಜ್ಜನರ ಸ್ವಭಾವವೇ ಆಗಿರುತ್ತದೆ. ಆದುದರಿಂದ ಶ್ರೀ ರಾಘವೇಂದ್ರ ಗುರುಗಳೇ ನನಗೆ ಕರಾವಲಂಬನವನ್ನು ಕೊಡಿರಿ.

**ಧೀರಾಹಿತಾ ನಚ ಗುರೌ ನ ಹರಾವಹಂ ಭೂ-**
**ಭಾರಾಯಿತೋಽಸ್ಮಿ ಚ ದಯಸ್ವ ಸಹಸ್ವ ದೋಷಾನ್॥**
**ದೌರಾತ್ಮ್ಯಮಸ್ಯ ಭಗವನ್ ಝುಟಿತಿ ಕ್ಷಮಸ್ವ**
**ಶ್ರೀರಾಘವೇಂದ್ರ ಮಮ ದೇಹಿ ಕರಾವಲಂಬಮ್॥೨೭॥**

ಗುರುಗಳೇ ನಾನು ಗುರುಗಳಲ್ಲಿ ಭಕ್ತಿ ಮಾಡಲಿಲ್ಲ ಹರಿಯಲ್ಲಿಯೂ ಮನಸ್ಸನ್ನು ಇಡಲಿಲ್ಲ ನಾನು ಭೂಮಿಗೆ ಭಾರನಾಗಿದ್ದೇನೆ. ನನ್ನ ಮೇಲೆ ದಯೆದೋರಿರಿ. ನನ್ನ ದೋಷಗಳನ್ನೆಲ್ಲ ಸಹನ ಮಾಡಿರಿ. ಪೂಜ್ಯರೇ ನನ್ನ ದುಷ್ಟ ತನವನ್ನು ಕೂಡಲೇ ಕ್ಷಮಿಸಿರಿ. ಶ್ರೀ ರಾಘವೇಂದ್ರ ಸ್ವಾಮಿಗಳೇ ನನಗೆ ನಿಮ್ಮ ಅಮೃತ ಹಸ್ತದ ಅವಲಂಬನವನ್ನು ನೀಡಿರಿ.

---

*ನರಸಂಬಧಿನಃ

#ಸುರಾಣಾಂ ಇಮೇ ಸಾರಾಃ